ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 23ನೇ ಮಾರ್ಚ್, 2020

ಸೀಟು ಬ್ಲಾಕಿಂಗ್ ದಂಧೆಯ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದಚುನಾಯಿತರಾದವರು):-

1498 (1671) ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ವೈದ್ಯಕೀಯ ಕಾಲೇಜಿನಲ್ಲಿ ಸೀಟ್ ಬ್ಲಾಕಿಂಗ್ ದಂಧೆ ನಿಯಂತ್ರಿಸಲು ಹೊಸ ಕಾನೂನು ತರುವ ಪ್ರಸ್ತಾವ ಸರ್ಕಾರದ ಮುಂದಿದೆಯೇ; ಈ ಕಾನೂನು ಎಂದಿನಿಂದ ಜಾರಿಗೆ ಬರುತ್ತದೆ ; ಸೀಟ್ ಬ್ಲಾಕಿಂಗ್ ದಂಧೆ ಮಾಡಿದ ಕಾಲೇಜು ಆಡಳಿತ ಮಂಡಳಿಯ ಮೇಲೆ ವಿಧಿಸುವ ದಂಡ ಮತ್ತು ಜೈಲು ಶಿಕ್ಷೆಯ ಬಗ್ಗೆ ಸರ್ಕಾರದ ನಿಲುವೇನು ;

(ಆ) ವೈದ್ಯಕೀಯ ಶಿಕ್ಷಣದಲ್ಲಿ ಯೋಗ ವಿಜ್ಞಾನವನ್ನು ಅಳವಡಿಸುವ ಕುರಿತು ಸರ್ಕಾರದ ನಿಲುವೇನು ; ಈ ಪಠ್ಯಕ್ರಮ ಯಾವ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರುತ್ತದೆ ;

(ಇ) ಸರ್ಕಾರಕ್ಕೆ ವೈದ್ಯಕೀಯ ಪ್ರವೇಶಾತಿಯಲ್ಲಿ ಸೀಟು ಬಿಟ್ಟು ಕೊಡುವುದಾಗಿ ಕಾಲೇಜಿಗೆ ಮಾನ್ಯತೆ (ಅಫಿಲಿಯೇಷನ್) ಪಡೆಯುವಾಗ ಒಪ್ಪಂದ ಮಾಡಿಕೊಂಡು ತದನಂತರ ಸರ್ಕಾರಕ್ಕೆ ಸೀಟು ಬಿಟ್ಟುಕೊಡದ ವೈದ್ಯಕೀಯ ಕಾಲೇಜಿನ ಆಡಳಿತ ಮಂಡಳಿಯ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ ; ಸರ್ಕಾರಕ್ಕೆ ಸೀಟು ಬಿಟ್ಟುಕೊಡದಿರುವ ವೈದ್ಯಕೀಯ ಕಾಲೇಜುಗಳ ಮಾನ್ಯತೆ ರದ್ದುಗೊಳಿಸುವ ಬಗ್ಗೆ ಸರ್ಕಾರದ ನಿಲುವೇನು ?